# ಕಾನನ

ನಿಸರ್ಗದೆಡೆಗೆ ಪಯಣ



## ಲೇಖನಗಳು




**ವಿನ್ಯಾಸ**

ಧನರಾಜ್ ಎಂ.

**ಮುಖಪುಟ ಛಾಯಾಚಿತ್ರ**

ವಿನೋದ್ ಕುಮಾರ್ ವಿ. ಕೆ.

**ಪರಿಷ್ಕರಣೆ**

ಮುರಳಿ ಎಸ್.

ಡಾ. ಮಧುಸೂಧನ ಹೆಚ್. ಸಿ.

**ಕರಡು ತಿದ್ದುಪಡಿ**

ಡಾ.ದೀಪಕ್ ಭ., ಮೈಸೂರು




# ಅತ್ತಿ ಮರ

**ಸಾಮಾನ್ಯ ಹೆಸರು : Cluster fig**

**ವೈಜ್ಞಾನಿಕ ಹೆಸರು : *Ficus recemosa***



© ಮಹದೇವ ಕೆ. ಸಿ. ಅತ್ತಿ ಮರ, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ

ಅತ್ತಿ ಮರವು ಭಾರತ, ಚೀನಾ ಹಾಗೂ ಆಸ್ಟ್ರೇಲಿಯಾ ದೇಶಗಳಲ್ಲಿ ಸಾಮಾನ್ಯವಾಗಿ ಕಾಣಸಿಗುವ ಮರವಾಗಿದ್ದು, ಸರಿ ಸುಮಾರು 30 ರಿಂದ 35 ಮೀಟರ್ ಎತ್ತರಕ್ಕೆ ಬೆಳೆಯುತ್ತದೆ. ಮರದ ತೊಗಟೆಯು ಕಂದು ಬಣ್ಣದಿಂದ ಕೂಡಿರುತ್ತದೆ. ಎಲೆಗಳು ಪರ್ಯಾಯವಾಗಿರುತ್ತವೆ ಹಾಗೂ ಎಲೆಗಳ ಮೇಲೆ ಸಣ್ಣ ನಯವಾದ ಕೂದಲಿನ ಆಕಾರದ ರಚನೆಯನ್ನು ಕಾಣಬಹುದು. ಈ ಅತ್ತಿ ಮರದ ವಿಶೇಷತೆಯೇ ಇದರ ಹೂ ಬಿಡುವ ವಿಧಾನ. ಸಾಮಾನ್ಯವಾಗಿ ಎಲ್ಲಾ ಮರಗಳೂ ಪರಾಗಸ್ಪರ್ಶ ಕ್ರಿಯೆಗೆ ಅನುಕೂಲವಾಗುವಂತೆ ಹಕ್ಕಿಗಳನ್ನು, ಕೀಟಗಳನ್ನು, ಚಿಟ್ಟೆಗಳನ್ನು ಆಕರ್ಷಿಸಲು ಬಣ್ಣ ಬಣ್ಣದ ಹೂವುಗಳನ್ನು ಬಿಡುತ್ತವೆ. ಆದರೆ ಈ ಅತ್ತಿ ಮರದ ಹೂವುಗಳನ್ನು ನೋಡಲು ಸಾಧ್ಯವಿಲ್ಲ, ಏಕೆಂದರೆ ಹೂವುಗಳು ನಮಗೆ ಕಾಣುವ ಅತ್ತಿಯ ಹಣ್ಣಿನ ಒಳಗೆ ಇರುತ್ತವೆ. ಇದನ್ನು ಫ್ಲೋರೆಸೆನ್ಸ್ ಎಂದು ಕರೆಯುತ್ತಾರೆ. ಈ ಹಣ್ಣಿನ ಒಳಭಾಗದಲ್ಲಿರುವ ಹೂವುಗಳ ಪರಾಗಸ್ಪರ್ಶ ಕ್ರಿಯೆಗೆ ಒಂದು ಪ್ರಭೇದದ ಕಣಜಗಳು ಸಹಾಯ ಮಾಡುತ್ತದೆ. ನಂತರ ಅತ್ತಿ ಕಾಯಿಗಳ ಬಣ್ಣ ಬದಲಾಗಿ ಕೆಂಪು ಬಣ್ಣಕ್ಕೆ ತಿರುಗುತ್ತವೆ. ಈ ಬಣ್ಣ ಬದಲಾಯಿಸುವುದು ಪಕ್ಷಿಗಳನ್ನು ಆಕರ್ಷಿಸಲು ಮತ್ತು ಇದು ತಮ್ಮ ಬೀಜ ಪ್ರಸರಣೆಗೆ ಮರಗಳು ಅಳವಡಿಸಿಕೊಂಡಿರುವ ತಂತ್ರವಾಗಿದೆ. ಹಾಗಾಗಿ ಈ ಅತ್ತಿ ಹಣ್ಣು ಬಿಡುವ ಸಮಯದಲ್ಲಿ ಹಲವಾರು ಪ್ರಭೇದದ ಪಕ್ಷಿಗಳನ್ನು ನೋಡಬಹುದು. ಸಂಜೆ ಸಮಯ ಬಾವಲಿಗಳೂ ಸಹ ಈ ಅತ್ತಿ ಹಣ್ಣನ್ನು ತಿನ್ನಲು ಬರುತ್ತವೆ. ವಿಶ್ವದಲ್ಲಿ ಸುಮಾರು 750 ಪ್ರಭೇದದ ಹತ್ತಿ ಕುಟುಂಬದ ಮರಗಳನ್ನು ಕಾಣಬಹುದು ಹಾಗೂ ಪ್ರತಿ ಮರಕ್ಕೂ ತನ್ನದೇ ಆದ ಕಣಜಗಳ ಪ್ರಭೇದಕ್ಕೆ ಸೇರಿದ ಕೀಟಗಳು ಪರಾಗಸ್ಪರ್ಶ ಕ್ರಿಯೆಯಲ್ಲಿ ಸಹಾಯ ಮಾಡುತ್ತವೆ. ಅತ್ತಿ ಮತ್ತು ಕಣಜಗಳ ಸಂಬಂಧ ಬಲು ರೋಚಕ. ಅತ್ತಿ ಮರದ ಬಗ್ಗೆ ಇನ್ನಷ್ಟು ತಿಳಿಯಲು https://kaananamag.in/?p=3867 ಲಿಂಕ್ ಅನ್ನು ಕ್ಲಿಕ್ ಮಾಡಿ.




# ಮುನಿಯುನ ಮಾದರಿ

"ಮನೆ ಕಟ್ಟಿ ನೋಡು.... ಮದುವೆ ಮಾಡಿ ನೋಡು" ಎಂಬ ಎರಡು ವಿಚಾರಗಳು ಅದೆಷ್ಟು ತ್ರಾಸದಾಯಕವೆಂಬುದು ಅನುಭವಿಸಿದವರಿಗೇ ಗೊತ್ತು. ಈ ಮಾತನ್ನು ಕೇಳಿದ ಕೂಡಲೇ ಪ್ರತಿಯೊಬ್ಬರಿಗೂ ಅನಿಸುವುದು 'ಉಸ್ಸಪ್ಪಾ...... ಅದೊಂದು ಜೀವಮಾನದ ಸಾಧನೆಯೇ ಸರಿ' ಎಂದು. ಮನೆ ಕಟ್ಟುವುದು ಸುಲಭದ ಮಾತಲ್ಲ. ಸೂಕ್ತವಾದ ಜಾಗ ಹಾಗೂ ಸಮಯ ಅದೃಷ್ಟವಿದ್ದರೆ ಮಾತ್ರ ನಮ್ಮ ಪಾಲಾಗುವುದು. ಇವೆರಡರ ಜೊತೆಗೆ ಮುಖ್ಯವಾಗಿ ಬೇಕಾದ್ದು ನಮ್ಮ ಬ್ಯಾಂಕ್ ನ ಉಳಿತಾಯ ಅಥವಾ ಹೆಣ್ಣು ಕೊಟ್ಟ ಮಾವನ ಬ್ಯಾಂಕ್ ಉಳಿತಾಯ.ಇವೆರಡೂ ಬಹಳ ಜನಕ್ಕೆ ಸಿಗೋದಿಲ್ಲ ಬಿಡಿ. ಇವೆಲ್ಲವನ್ನೂ ಹೇಗೋ ಸಂಬಾಳಿಸಿಕೊಂಡು ಮನೆ ಕಟ್ಟಲು ಪ್ರಾರಂಭಿಸಿದರೂ ಎಲ್ಲರನ್ನೂ ಮೆಚ್ಚಿಸುವಂತಹ ಮನೆಯನ್ನೇ ಕಟ್ಟಬೇಕೆಂಬ ಹಂಬಲಕ್ಕೆ ಬಿದ್ದುಬಿಟ್ಟರೆ ಅವರನ್ನು ಆ ದೇವರೇ ಕಾಪಾಡಬೇಕು. ಇಂತಹ ಗೊಂದಲ ಗೋಜಲುಗಳು ಇತರೆ ಜೀವಿಗಳಲ್ಲಿಯೂ ಇವೆಯೇ?? ಬನ್ನಿ ಓದಿ ನಿರ್ಧರಿಸುವಿರಂತೆ.

ವಿಶಿಷ್ಟವಾದ ಸೂರು ಕಟ್ಟಿಕೊಳ್ಳುವಂತಹ ಅಪಾರ ಚಾಣಾಕ್ಷತೆಯನ್ನು ಪ್ರಕೃತಿಯಿಂದ ವರ ಪಡೆದಿರುವ ಜೀವಿಗಳೆಂದರೆ ಹಕ್ಕಿಗಳು ಎಂಬುದು ಅತಿಶಯೋಕ್ತಿಯಲ್ಲ. ಪ್ರತಿ ಹಕ್ಕಿಯ ಗೂಡು ಕೂಡ ಯಾವುದೇ ಸಿವಿಲ್ ಇಂಜಿನಿಯರ್ ಕಟ್ಟುವ ಮನೆಗಿಂತ ಕಡಿಮೆಯೇನಲ್ಲ. ಒಂದೊಂದು ಹಕ್ಕಿಯ ಗೂಡು ಕೂಡ ವಿಭಿನ್ನ ಹಾಗೂ ವಿಶಿಷ್ಟ. ಅದರಲ್ಲೂ ಅತ್ಯಂತ

ಸಾಮಾನ್ಯವಾಗಿ ಕಂಡು ಬರುವ ಗೀಜಗ ಹಕ್ಕಿಯ ಗೂಡು ಆಧುನಿಕ ನಿರ್ಮಾಣ ತಂತ್ರಜ್ಞಾನಕ್ಕೂ ಸವಾಲೊಡ್ಡುವಂತಿರುತ್ತದೆ. ಕೇವಲ ಹುಲ್ಲು ಕಡ್ಡಿಗಳನ್ನು ಸಂಗ್ರಹಿಸಿ ಗೂಡು ಕಟ್ಟಲು ಆ ಹಕ್ಕಿಗಳು ಪಡುವ ಪರಿಶ್ರಮ ಅಷ್ಟಿಷ್ಟಲ್ಲ. ಒಂದು ಸಣ್ಣಗಾತ್ರದ ಗೂಡು ಕಟ್ಟಲು ಈ ಹಕ್ಕಿಗಳು ನೂರಾರು ಬಾರಿ ಸಂಚರಿಸಿ ಹುಲ್ಲು ಸಂಗ್ರಹಿಸಬೇಕು. ಕೇವಲ ತಮ್ಮ ಮೊನಚಾದ ಕೊಕ್ಕನ್ನು ಬಳಸಿ ಅದನ್ನು ಬಿಗಿಯಾಗಿ ನೇಯಬೇಕು. ಗೂಡು ನಿರ್ಮಿಸಲು ಜಾಗದ ಆಯ್ಕೆ, ಇರಬೇಕಾದ ದಿಕ್ಕು, ನಿರ್ಮಾಣದಲ್ಲಿ ಹಕ್ಕಿಗಳು ತೋರುವ ಕೌಶಲ್ಯ ವಾಸ್ತುಶಾಸ್ತ್ರಜ್ಞರನ್ನೂ ನಾಚಿಸುತ್ತದೆ. ಸೂರ್ಯನ ಬೆಳಕು, ಬೀಸುವ ಗಾಳಿ, ಸುರಿಯುವ ಮಳೆ, ಇತ್ಯಾದಿ ಅಂಶಗಳನ್ನೆಲ್ಲ ಲೆಕ್ಕ ಹಾಕಿ ಇವು ಗೂಡು ಕಟ್ಟುತ್ತವೆಂದರೆ ಅದೊಂದು ವಿಸ್ಮಯವಲ್ಲವೇ?. ಹಕ್ಕಿಯು ತನ್ನ ಪೀಳಿಗೆಯನ್ನು ಮುಂದುವರಿಸಬೇಕೆಂದರೆ ಈ ಲೆಕ್ಕಾಚಾರಗಳೆಲ್ಲ ಪಕ್ಕಾ ಇರಬೇಕು. ಗೂಡು ಕಟ್ಟಲು ಗುದ್ದಲಿ ಪೂಜೆ ಆರಂಭವಾಗುವುದೇ ಮುಂಗಾರಿನಲ್ಲಿ. ಮಳೆಯಲ್ಲಿ ಮಿಂದ ನೆಲ ಹಚ್ಚ ಹಸಿರನ್ನು ಹೊದ್ದು ಗೂಡಿನ ನಿರ್ಮಾಣಕ್ಕೆ ಬೇಕಾದ ಕಚ್ಚಾ ವಸ್ತುವನ್ನು ಕೊರತೆಯೇ ಆಗದಂತೆ ಪೂರೈಸುತ್ತದೆ. ಅಷ್ಟೇ ಅಲ್ಲದೆ ಮುಂಗಾರು ಮುಗಿಯುವ ವೇಳೆಗೆ ಹುಲ್ಲಿನ ಗಿಡಗಳಲ್ಲೆಲ್ಲಾ ಕಾಳು ಮೂಡಿರುತ್ತದೆ. ಅದೇ ವೇಳೆಗೆ ಗೀಜಗದ ಮರಿಗಳೂ ಸಹ ಗೂಡಿನೊಳಗೆ ಕುಳಿತು ಚುಂಯ್ ಗುಟ್ಟುತ್ತ ತುತ್ತಿಗಾಗಿ ಕಾಯುತ್ತಿರುತ್ತವೆ. ಮರಿಗಳಿಗೆ ಆಹಾರದ ಸಮಸ್ಯೆಯೇ ಉದ್ಭವಿಸದಂತೆ ರೇಷನ್ ಸಿಗುವುದರಿಂದ ಸ್ವಚ್ಛಂದವಾಗಿ ಕಾಳುಗಳನ್ನು ಹೆಕ್ಕಿತಂದು ಉಣಬಡಿಸುತ್ತವೆ.



ಮಳೆಗಾಲ ಆರಂಭವಾದ ಕೂಡಲೆ ಗಂಡು ಗೀಜಗ ಹಕ್ಕಿಗಳು ಸೂರು ಕಟ್ಟಲು ನಿವೇಶನ ಹುಡುಕಲು ಪ್ರಾರಂಭಿಸುತ್ತವೆ. ಜಾಗದ ಆಯ್ಕೆಯಿಂದ ಹಿಡಿದು ಮನೆ ಆರ್.ಸಿ.ಸಿ ಹಂತಕ್ಕೆ ಬರುವವರೆಗೂ ಗಂಡಿನದ್ದೇ ಜವಾಬ್ದಾರಿ. ಈ ಹುಡುಕಾಟದಲ್ಲಿ ಸೂಕ್ತ ಜಾಗದ ಆಯ್ಕೆ ಸರಿಹೋದಲ್ಲಿ ಆ ಹಕ್ಕಿಯ ಪೀಳಿಗೆ ಮುಂದುವರೆಯುವುದಕ್ಕೆ ಅರ್ಧದಾರಿ ಸುಗಮವಾದಂತೆ. ಜಾಗದ ಆಯ್ಕೆ ಮಾಡುವಾಗ ಅದು ಗಮನಿಸುವ ಬಹು ಮುಖ್ಯ ಅಂಶವೆಂದರೆ 'ರಕ್ಷಣೆ'. ಶತ್ರುಗಳಿಂದ ಗೂಡನ್ನು ರಕ್ಷಿಸಿಕೊಳ್ಳುವುದು ಸವಾಲಿನ ಕೆಲಸ. ಹಾಗಾಗಿಯೇ ಈ ಹಕ್ಕಿಗಳು ನೀರಿರುವ ಜಾಗವನ್ನು ಹುಡುಕಿ ಅದರ ಮೇಲ್ಭಾಗಕ್ಕೆ ಹರಡಿದ ಮರದ ಟೊಂಗೆಗಳನ್ನು ಆಯ್ಕೆ ಮಾಡುತ್ತವೆ. ಇದರಿಂದಾಗಿ ನೆಲದಿಂದ ಬಂದು ತೊಂದರೆ ಕೊಡಬಹುದಾದ ಬಹುತೇಕ ಶತ್ರುಗಳನ್ನು ದೂರವಿಡಬಹುದು. ಅಲ್ಲದೇ ಬೆಕ್ಕಿನಂತಹ ಸಣ್ಣ ಪುಟ್ಟ ಪ್ರಾಣಿಗಳು ನೀರಿನಲ್ಲಿ ಬಿದ್ದು ಬಿಡುವೆನೆಂಬ ಭಯದಿಂದ ಈ ಗೂಡುಗಳ ಹತ್ತಿರ ಸುಳಿಯುವುದಿಲ್ಲ. ಇನ್ನು ಗೂಡು ಕಟ್ಟಲು ಯಾವ ರೀತಿಯ ಗಿಡಮರ ಸೂಕ್ತವೆಂಬ ಪ್ರಶ್ನೆ ಬಂದಾಗ ಇವುಗಳ ಆಯ್ಕೆ ಮುಳ್ಳಿನ ಗಿಡಗಳಾಗಿರುತ್ತವೆ. ಮೊಟ್ಟೆಗಳನ್ನು ಕಬಳಿಸಲು ಬರುವ ಹಾವು ಇನ್ನಿತರ ಜೀವಿಗಳು ಮುಳ್ಳಿನ ಗಿಡದ ಮೇಲೆ ಸುಳಿದಾಡುವುದು ಕೊಂಚ ಕಡಿಮೆ. ಎಷ್ಟು ದಪ್ಪನೆಯ ಮರದ ಟೊಂಗೆಯ ತುದಿಯಲ್ಲಿ ಗೂಡು ಕಟ್ಟಬಹುದು ಎಂಬ ಆಯ್ಕೆಯೂ ಬಹುಮುಖ್ಯ. ತುಂಬಾ ತೆಳುವಾದ ಕಡ್ಡಿಯಾದರೆ ಮುಂಗಾರು ಮಾರುತಗಳ ಹೊಡೆತಕ್ಕೆ ತುಂಡರಿಸಬಹುದು, ತುಂಬಾ ದಪ್ಪನೆಯ ಟೊಂಗೆಯಾದರೆ ಗೂಡನ್ನು ನಾಶಗೊಳಿಸಬಲ್ಲ ಜೀವಿಗಳ ಸಂಚಾರಕ್ಕೆ ಭದ್ರ ದಾರಿಯನ್ನು ಒದಗಿಸುವಂತಾಗುತ್ತದೆ. ಈ ಎರಡೂ ಸಮಸ್ಯೆಗಳನ್ನು ಸರಿದೂಗಿಸುವಂತಹ ಟೊಂಗೆಯನ್ನು ಆಯ್ಕೆ ಮಾಡುವ ಚಾಣಾಕ್ಷತೆಯನ್ನು ಆ ಗಂಡು ಹಕ್ಕಿ ಹೊಂದಿರಲೇಬೇಕು.




ಟಿ.ವಿ ಯಲ್ಲಿ ಬರುವ "ಸುಭದ್ರ ನಿರ್ಮಾಣಕ್ಕೆ ಗುಣ ಮಟ್ಟದ ಸಿಮೆಂಟನ್ನೇ ಬಳಸಿ" ಎಂಬ ಜಾಹೀರಾತಿನಂತೆ ಗೂಡು ಕಟ್ಟಲು ಸೂಕ್ತ ಕಚ್ಚಾವಸ್ತುವಿನ ಆಯ್ಕೆ ಬಹಳ ಮುಖ್ಯ. ಒಣಗಿದ ಹುಲ್ಲು ನೇಯ್ಗೆಗೆ ಸೂಕ್ತವಲ್ಲ. ಹೆಚ್ಚು ನಾರಿರುವ ಹಸಿರು ಹುಲ್ಲನ್ನು ಹುಡುಕಿ, ಪರಿಶೀಲಿಸಿ ಹೊತ್ತು ತಂದು ಕೇವಲ ತಮ್ಮ ಕೊಕ್ಕಿನಿಂದಲೇ ನೇಯುತ್ತವೆ. ನಂತರ ಒಣಗುವ ಹುಲ್ಲು ಕಟ್ಟಿದಂತೆಯೇ ಬಿಗಿಯಾಗುತ್ತಾ ಹೋಗುತ್ತದೆ. ಈ ಕೆಲಸವನ್ನು ಅವಿರತವಾಗಿ ಮಾಡಿ ಹದಿನೈದರಿಂದ ಇಪ್ಪತ್ತು ದಿನಗಳಲ್ಲಿ ಗೂಡು ಕಟ್ಟುವ ಕೆಲಸ ಮುಗಿಸುತ್ತವೆ. ಗೂಡಿನ ನಿರ್ಮಾಣ ಅರ್ಧ ಮುಗಿದಾಗ ಗೀಜಗ ಹಕ್ಕಿಯ ಜೀವನಕ್ರಮದ ರೋಚಕತೆ ಆರಂಭವಾಗುತ್ತದೆ. ಗಂಡು ಈಗ ಮನೆ ಕಟ್ಟುವುದರ ಜೊತೆಗೆ ಮಡದಿಯನ್ನೂ ಹುಡುಕಬೇಕು. ಅರ್ಧಂಬರ್ಧ ಕಟ್ಟಿದ ಗೂಡಿನ ಮೇಲೆ ಗಂಡು ಕುಳಿತು ತನ್ನ ರೆಕ್ಕೆ ಬಡಿಯುತ್ತಾ ಚಿರ್ರ್... ಚಿರ್ರ್ ..... ಎಂದು ಚೀರುತ್ತಾ ಹೆಣ್ಣನ್ನು

ಕರೆಯುತ್ತದೆ. ಸಾಮಾನ್ಯವಾಗಿ ಗೀಜಗ ಹಕ್ಕಿಗಳು ಒಂದೇ ಕಡೆ ಹತ್ತಾರು ಗೂಡುಗಳನ್ನು ಕಟ್ಟುವುದರಿಂದ ಎಲ್ಲಾ ಗೂಡುಗಳ ನಿರ್ಮಾತೃಗಳು ಒಮ್ಮೆಯೇ ಹೀಗೆ ಮಾಡುವುದರಿಂದ ಆ ದೃಶ್ಯ ನೋಡುವುದೇ ಅಮೋಘ. ಬೆಂಗಳೂರಿನ ಚಿಕ್ಕಪೇಟೆಯ ಸೀರೆ ಅಂಗಡಿಯವರು ಹೊರಗೆ ನಿಂತು ಮಹಿಳಾಮಣಿಯರನ್ನು ನಮ್ಮ ಅಂಗಡಿಗೆ ಬನ್ನಿ ಎಂದು ಕರೆಯುವ ದೃಶ್ಯ ನೆನಪಾಗುತ್ತದೆ. ಹೆಣ್ಣಿಗೆ ಮಾತ್ರ ಸ್ವಯಂವರದ ಉತ್ಸವ ಆರಂಭವಾಗುತ್ತದೆ. ಹಲವಾರು ಗೂಡುಗಳಿಗೆ ಭೇಟಿ ನೀಡುವ ಹೆಣ್ಣು ಗೂಡನ್ನು ಹಲವಾರು ಆಯಾಮಗಳಲ್ಲಿ ಪರಿಶೀಲಿಸುತ್ತದೆ. ಗೂಡಿನ ಜಾಗ, ಟೊಂಗೆಯ ಆಯ್ಕೆ, ನೇಯ್ಗೆಯ ಕೌಶಲ್ಯ, ಗಾತ್ರ, ಗೂಡೊಳಗಿನ ಬಾಣಂತಿ ಕೋಣೆ (ಮೊಟ್ಟೆಯಿಟ್ಟು ಕಾವಿಗೆ ಕೂರುವ ಜಾಗ), ಕೊಳವೆಯಂತಹ ಬಾಗಿಲಿನ ಉದ್ದ, ರಕ್ಷಣಾ ಕ್ರಮಗಳು, ಹೀಗೆ ಎಲ್ಲದಕ್ಕೂ ಅಂಕಗಳಿರುತ್ತವೆ. ಹೆಚ್ಚು ಅಂಕ ಪಡೆಯುವ ಗೂಡಿನ ಮಾಲೀಕನೇ ಹೆಣ್ಣಿನ ಆಯ್ಕೆ. ಈ ಆಯ್ಕೆಯು ಮುಂದಿನ ಪೀಳಿಗೆಯ ಯಶಸ್ಸಿಗೆ ಅಡಿಪಾಯವಾಗುತ್ತದೆ. ಹೆಣ್ಣಿನ ಪರಿಶೀಲನಾ ಭೇಟಿಯಲ್ಲಿ ಆಕೆಗೆ ತನ್ನ ಗೂಡು ಇಷ್ಟವಾಗದಿದ್ದರೆ ಮುಂದೇನು ಗತಿ ಎಂಬ ಆತಂಕದಿಂದ ಕೆಲವು ಗಂಡುಗಳು ಎರಡು ಮೂರು ಗೂಡುಗಳನ್ನೂ ಸಹ ಒಂದಲ್ಲದಿದ್ದರೆ ಮತ್ತೊಂದು ಎಂಬಂತೆ ನಿರ್ಮಿಸಿರುತ್ತವೆ. ಇನ್ನು ಕೆಲವು ಪ್ರಳಯಾಂತಕ ಗಂಡು ಹಕ್ಕಿ ಬೇರೆ ಗಂಡು ಹಕ್ಕಿ ಕಟ್ಟಿರುವ ಗೂಡು, ತನ್ನ ಗೂಡಿಗಿಂತ ಚಂದ ಇದೆ ಅನ್ನಿಸಿದರೆ ಅದರೊಡನೆ ಜಗಳವಾಡಿ, ಬೆದರಿಸಿ, ಗೂಡನ್ನು ಕಬಳಿಸಿಕೊಂಡು ಹೆಣ್ಣಿನ ಮುಂದೆ ತಾನೇ ಕಟ್ಟಿದ ಗೂಡು ಎಂಬಂತೆ ಪೋಸು ನೀಡುವುದೂ ಇದೆ. ಮನುಷ್ಯ ಮಾತ್ರರಲ್ಲಿ ಕಂಡು ಬರುವ ಕೆಲವು ದುಷ್ಟ ಗುಣಗಳು ಒಮ್ಮೊಮ್ಮೆ ಇನ್ಯಾವುದೋ ಜೀವಿಯಲ್ಲಿ ಕಂಡಬಂದು ಅಚ್ಚರಿ ಮೂಡಿಸುತ್ತದೆ.




ಗೂಡಿನ ಆಯ್ಕೆಯ ಬಳಿಕ ಗಂಡು ಹೆಣ್ಣು ಒಂದಾಗಿ ದಾಂಪತ್ಯ ಆರಂಭಿಸುತ್ತವೆ. ಈಗ ಗೂಡನ್ನು ಪೂರ್ಣಗೊಳಿಸಲು ಹೆಣ್ಣು ಗಂಡಿಗೆ ಜೊತೆಯಾಗುತ್ತದೆ. ಇಬ್ಬರೂ ಸೇರಿ ಗೂಡನ್ನು ಪೂರ್ಣಗೊಳಿಸುವ ವೇಳೆಗೆ ಪ್ರಣಯಕಾಲ ಸನ್ನಿಹಿತವಾಗುತ್ತದೆ. ಮನೆ ನಿರ್ಮಾಣ ಮುಗಿದ ಕೂಡಲೇ ಮನೆಯ ಒಳಾಂಗಣ ವಿನ್ಯಾಸ (interior designing) ಪೂರ್ತಿಯಾಗಿ ನನ್ನದೇ ಆಯ್ಕೆ ಎಂದು ಹೇಳುತ್ತಾ ನಾಲ್ಕೈದು ಲಕ್ಷ ಹೆಚ್ಚುವರಿ ಹೊರೆ ಹೊರೆಸುವ ಹೆಂಡತಿಯರಂತೆ, ಗೂಡನ್ನು ಕಟ್ಟಿ ಮುಗಿಸಿದ ಮೇಲೆ ಒಳಗಿನ ಅಲಂಕಾರವೆಲ್ಲವನ್ನು ಮಾಡುತ್ತ ಹೆಣ್ಣು ಹಕ್ಕಿಯು ಗೂಡಿಗೆ ಒಂದು ಅಂತಿಮ ಸ್ಪರ್ಶ (finishing touch) ಕೊಡುತ್ತದೆ. ಎರಡರಿಂದ ನಾಲ್ಕು ಮೊಟ್ಟೆಗಳನ್ನಿಡುವ ಹೆಣ್ಣು ಎರಡು ವಾರಗಳವರೆಗೆ ಕಾವು ಕೊಡುತ್ತದೆ. ಮೊಟ್ಟೆಯೊಡೆದು ಹೊರಬರುವ ಮರಿಗಳನ್ನು ಸುಮಾರು ಮೂರು ವಾರಗಳವರೆಗೆ ಗಂಡು ಹೆಣ್ಣು ಇಬ್ಬರೂ ಕಾಳುಣಿಸಿ ಪೋಷಿಸುತ್ತವೆ. ಮೊದಲು ಜೋಡಿಯಾದ ಹೆಣ್ಣು ಕಾವಿಗೆ ಕುಳಿತ ಅವಧಿಯಲ್ಲಿ ಗಂಡು ಸುಮ್ಮನೆ ಕೂರದೆ

ಇನ್ನೊಂದಷ್ಟು ಗೂಡುಗಳನ್ನು ಕಟ್ಟಿ ಕೈಲಾದಷ್ಟು ಹೆಣ್ಣನ್ನು ಆಕರ್ಷಿಸಿ ಎರಡು ಮೂರು ಶಾಖೆಗಳನ್ನು ತೆಗೆದಿರುತ್ತದೆ. ಅಂದರೆ ಇಲ್ಲಿ ಗಂಡು ಗೀಜಗ ಹಕ್ಕಿಯು ಏಕಪತ್ನಿ ವ್ರತಸ್ಥನಲ್ಲವೆಂಬುದು ತಿಳಿಯುತ್ತದೆ. ಶತಾಯಗತಾಯ ತನ್ನ ಸಂತತಿಯನ್ನು ಹೆಚ್ಚಿನ ಸಂಖ್ಯೆಯಲ್ಲಿ ವೃದ್ಧಿಸಬೇಕೆಂಬುದು ಹಕ್ಕಿಯ ಪರಮ ಧ್ಯೇಯ. ಇದನ್ನೇ ಚಾರ್ಲ್ಸ್ ಡಾರ್ವಿನ್ ವಿಕಾಸವಾದದ ಸಿದ್ಧಾಂತದಲ್ಲಿ Prodigality of reproduction ಎಂದು ಕರೆದಿರುವುದು. ಅಂದರೆ ವಿಕಸನದ ಹಾದಿಯಲ್ಲಿ ಜೀವಿಯ ಬಲಿಷ್ಠತೆ ಅದರ ಸಂತಾನ ಸಾಮರ್ಥ್ಯದ ಪ್ರತೀಕವಾಗಿರುತ್ತದೆ.


© ಶ್ರೀಕಾಂತ್ ಎ.ವಿ.

ಒಂದು ಪುಟ್ಟ ಗೂಡು ಹಕ್ಕಿಯ ಬದುಕನ್ನು ಸಾರ್ಥಕಗೊಳಿಸಿ ಸಂತತಿಯ ನಿರಂತರತೆಗೆ ಸಹಾಯಕಾರಿಯಾಗುತ್ತದೆ. ಆದರೆ ಎಲ್ಲವೂ ನಾವಂದುಕೊಂಡಂತೆ ನಡೆಯುವುದಿಲ್ಲ ಎಂಬ ಮಾತು ಸಕಲ ಜೀವರಾಶಿಗೂ ಅನ್ವಯಿಸುತ್ತದೆ. ಒಂದೊಮ್ಮೆ ಆ ಗೀಜಗ ಹಕ್ಕಿಯ ಗ್ರಹಚಾರ ನೆಟ್ಟಗಿಲ್ಲದಿದ್ದರೆ ಅವು ಬೆವರು ಸುರಿಸಿ (ಉತ್ಪ್ರೇಕ್ಷೆಗಾಗಿ ಮಾತ್ರ!!!) ಕಟ್ಟಿದ ಗೂಡನ್ನು ಇನ್ನಾವುದೋ ಹಕ್ಕಿ ಬಂದು ಕಬ್ಜ ಮಾಡಬಹುದು. ತಮ್ಮ ಪುಟ್ಟ ಕುಟುಂಬಕ್ಕಾಗಿ ಸೂರೊಂದು ನಿರ್ಮಿಸಲು ಗಂಡು ಗೀಜಗ ಹಕ್ಕಿಗಳು ಎಡಬಿಡದೆ ಓಡಾಡಿ ಪಟ್ಟ ಪರಿಶ್ರಮವನ್ನು ಚಿತ್ರಗಳಲ್ಲಿ ಕಾಣಬಹುದು. ಮತ್ತೊಂದು ಚಿತ್ರದಲ್ಲಿ, ತನ್ನ ಒಂದು ಕೂದಲೆಳೆಯಷ್ಟು ಪರಿಶ್ರಮವನ್ನೂ ಹಾಕದೆ ಮನೆಯೊಂದನ್ನು ಕೇವಲ ತನ್ನ ಚಾಕಚಕ್ಯತೆಯಿಂದ ಬಿಳಿಪೃಷ್ಠದ ರಾಟವಾಳ (White rumped munia) ವೊಂದು ಅನಾಯಾಸವಾಗಿ ಆಕ್ರಮಿಸುತ್ತಿರುವುದನ್ನು ಕಾಣಬಹುದು. ಇದನ್ನು ಜೀವವಿಜ್ಞಾನದಲ್ಲಿ Brood mobbing ಎನ್ನುತ್ತಾರೆ. (ಹೆಚ್ಚಿನ ಮಾಹಿತಿಗಾಗಿ- Dhindsa, M. S.; Sandhu, P. S. (1988). "Response of the Baya Weaverbird (Ploceus philippinus) to eggs of the White-throated Munia (Lonchura malabarica): relation to possible incipient brood parasitism". Zool. Anz. 220: 216–222.) ಖ್ಯಾತ ಪಕ್ಷಿತಜ್ಞ ಸಲೀಂ ಅಲಿಯವರು ಈ ರಾಟವಾಳದ ಗೂಡು ಆಕ್ರಮಿಸುವ ಗುಣವನ್ನು ವಿವರಿಸಿದ್ದಾರೆ. (ಹೆಚ್ಚಿನ ಮಾಹಿತಿಗಾಗಿ - Ali Salim; Ambedkar, Vijaykumar C. (1956). "Notes on the Baya Weaver Bird, Ploceus philippinus Linn". J. Bombay Nat. Hist. Soc. 53 (3): 381–389.) ಇದನ್ನು ಒಂದು ಪ್ರಾಕೃತಿಕ ನಿಯಮವೆಂದೇ ಒಪ್ಪೋಣ. ಮುನಿಯ ಹಕ್ಕಿಯ ಈ ಅಪರೂಪದ ನಡವಳಿಕೆಯ ಹಿಂದೆ ನಿಸರ್ಗದ ಅದ್ಯಾವ ಪ್ರಕ್ರಿಯೆ ಅಡಗಿದೆಯೋ ಯಾರಿಗೆ ಗೊತ್ತು!!!!

ಆದರೆ ಇಂತಹ ಪರಾವಲಂಬಿ ಗುಣವನ್ನು ನಮ್ಮ ಸುತ್ತಮುತ್ತ ಒಂದಷ್ಟು ಜನರು ಅನುಸರಿಸುತ್ತಿರುವುದನ್ನು ಇತ್ತೀಚಿನ ದಿನಗಳಲ್ಲಿ ಕಾಣುತ್ತಿದ್ದೇವೆ. ಸಾಲಸೋಲ ಮಾಡಿ, ಇದ್ದ ಒಡವೆ ಆಭರಣಗಳನ್ನೆಲ್ಲಾ ಗಿರವಿ ಇಟ್ಟು, ಆಪ್ತರ ಬಳಿ ಕೈ ಸಾಲ ಮಾಡಿ, ಹಗಲು-ರಾತ್ರಿ, ಬಿಸಿಲು-ಮಳೆ ಎನ್ನದೇ, ಆರೋಗ್ಯದ ಕಾಳಜಿಯನ್ನೂ ಮರೆತು ಜನರು ಮನೆ ಕಟ್ಟುತ್ತಾರೆ. ತಮ್ಮ ಜೀವಮಾನದ ಕೂಡಿಟ್ಟ ಹಣವನ್ನೆಲ್ಲಾ ಇದಕ್ಕೆ ತಂದು ಸುರಿಯುತ್ತಾರೆ. ಆದರೆ ನಮ್ಮ ನಡುವೆಯೂ ಈ ಮುನಿಯ ಹಕ್ಕಿಯಂತವರು ಇರುತ್ತಾರೆ ಎಂಬುದು ಕಹಿ ಸತ್ಯ. ತಮ್ಮ ಕುತಂತ್ರದಿಂದ, ತೋಳ್ಬಲದಿಂದ, ಬಲವಂತದಿಂದ ಯಾರೋ ಕಟ್ಟಿದಮನೆಯನ್ನು ರಿಯಲ್ ಎಸ್ಟೇಟ್ ಮಾಫಿಯಾದ ಹೆಸರಲ್ಲಿ ಆಕ್ರಮಿಸಿಕೊಂಡು ಅವರನ್ನು ಬೀದಿಗೆ ತಳ್ಳಿದಂತಹ ಅನೇಕ ಉದಾಹರಣೆಗಳನ್ನು ಆಗೀಗ ಕೇಳುತ್ತಿರುತ್ತೇವೆ, ಕಾಣುತ್ತಿರುತ್ತೇವೆ. ಇಂತಹ "ಮುನಿಯನ ಮಾದರಿ" ಯನ್ನು ಅನುಸರಿಸಿ ಬದುಕುವವರ ನಡುವೆ ನಾವು ಎಚ್ಚರಿಕೆಯಿಂದಲೇ ಬದುಕಬೇಕು.

(ಅಂದ ಹಾಗೆ ಎಲ್ಲಾ ರಾಟವಾಳ ಹಕ್ಕಿಗಳೂ ಹೀಗೆಯೇ ಬದುಕುವುದಿಲ್ಲ, ಬಹುತೇಕ ಅವು ಕೂಡ ತಮ್ಮ ಸ್ವಂತಗೂಡನ್ನು ತಾವೇ ನಿರ್ಮಿಸುತ್ತವೆ)




**ಲೇಖನ: ಶ್ರೀಕಾಂತ್ ಎ. ವಿ.**
**ಶಿವಮೊಗ್ಗ ಜಿಲ್ಲೆ**




# ಗದ್ದೆ ಮಿಂಚುಳ್ಳಿಯ ಪ್ರಣಯದಾಟ

ಮಿಂಚುಳ್ಳಿಗಳು ಅಪ್ರತಿಮ ಬೇಟೆಗಾರ ಹಕ್ಕಿಗಳು. ನೋಡಲು ಸುಂದರ ಮತ್ತು ಬೇಟೆಯಾಡುವಾಗ ಬಲು ಚತುರ. ಮಿಂಚುಳ್ಳಿಗಳಲ್ಲಿ ಹಲವಾರು ಪ್ರಭೇದಗಳಿದ್ದರೂ ಸಾಮಾನ್ಯವಾಗಿ ನಮಗೆ ಕಾಣ ಸಿಗುವುದು ಗದ್ದೆ ಮಿಂಚುಳ್ಳಿ (White-throated kingfisher; Halcyon capensis). ಅಚ್ಚ ನೀಲಿ ಬಣ್ಣದ ಬೆನ್ನು ಮತ್ತು ಬಾಲದ ರೆಕ್ಕೆ. ಕಡು-ಕಂದು ಬಣ್ಣದ ತಲೆ, ಕುತ್ತಿಗೆಯ ಹಿಂಭಾಗ ಮತ್ತು ಕೆಳಮೈ. ಗಂಟಲು ಮತ್ತು ಎದೆಯ ಭಾಗ ಅಚ್ಚ ಬಿಳಿ. ಗಟ್ಟಿಮುಟ್ಟಾದ ಉದ್ದ, ದಪ್ಪ ಮತ್ತು ಚೂಪಾದ ಕೆಂಪು ಕೊಕ್ಕಿರುವ ಚೆಂದದ ಹಕ್ಕಿ. ಗಂಡು ಹೆಣ್ಣುಗಳಲ್ಲಿ ನೋಡಲು ವ್ಯತ್ಯಾಸವಿಲ್ಲ. ಹರಟೆಯಂತೆ ಚೆಕ್-ಎಕ್-ಎಕ್-ಎಕ್---- ನಿರಂತರ ಕೂಗು. ಹಾರುವಾಗಲೂ ಇದೇ ಕೂಗು. ಮೀನು-ಶಿಕಾರಿ ಎಂದು ಹೆಸರಿದ್ದರೂ ಚೇಳು, ಹಲ್ಲಿ, ಹಾವುರಾಣಿ, ಓತಿಕ್ಯಾತ, ಏಡಿ, ಮಿಡತೆ ಮುಂತಾದವುಗಳನ್ನು ತಿನ್ನುತ್ತದೆ.

ಸಂತಾನಾಭಿವೃದ್ಧಿಯ ಸಮಯ ಮಾರ್ಚ್ ನಿಂದ ಜುಲೈವರೆಗೆ. ಹೆಣ್ಣು ಗಂಡನ್ನು ಆಯ್ಕೆ ಮಾಡುವ ಸಮಯ. ಮೊನ್ನೆ ಮಾರ್ಚ್ ತಿಂಗಳ ಎರಡನೇ ವಾರದಲ್ಲಿ ದಾವಣಗೆರೆಯಲ್ಲಿ ಪಕ್ಷಿ ವೀಕ್ಷಣೆಯಲ್ಲಿ ತೊಡಗಿದ್ದ ನಮಗೆ ಉದ್ದ ಗೂಟದ ಮೇಲೆ ಕುಳಿತು ಜೋರಾಗಿ ಕೂಗುತ್ತಿದ್ದ ಗದ್ದೆ ಮಿಂಚುಳ್ಳಿ ಕಣ್ಣಿಗೆ ಬಿತ್ತು. ಅದರ ಸಡಗರ




ನೋಡಿದಾಗ ಸುತ್ತಲೂ ಏನೋ ವಿಸ್ಮಯ ನಡೆಯುತ್ತಿದೆ ಎಂದು ಅರಿತ ನಾವು ಅಲ್ಲೇ ಬದಿಯಲ್ಲಿ ನಿಂತೆವು. ಉತ್ತೇಜಿತ ಹಕ್ಕಿ ತನ್ನ ಬಾಲವನ್ನು ಸ್ವಲ್ಪವೇ ಕುಣಿಸಿ ಅಗಾಗ್ಗೆ ರೆಕ್ಕೆಯನ್ನು ಅಗಲಿಸಿ ತನ್ನ ಸೌಂದರ್ಯ ಪ್ರದರ್ಶಿಸುತ್ತಿತ್ತು. ಮೂರ್ನಾಲ್ಕು ಹಕ್ಕಿಗಳು

ದೊಡ್ಡದಾಗಿ ಅರಚುತ್ತಾ ಆಚೀಚೆ ಹಾರುತ್ತಿದ್ದವು. ಮಧ್ಯದಲ್ಲಿ ಒಂದು ಹಕ್ಕಿಯಿಂದ ಸಣ್ಣ ಕೂಗು ಆಹ್ವಾನದಂತಿತ್ತು. ಅಲ್ಲಲ್ಲಿ ಇದ್ದ ಬೇರೆ ಮಿಂಚುಳ್ಳಿಗಳು ಗಳಿಗೆಗೊಂದು ಬಾರಿ ತಮ್ಮ ರೆಕ್ಕೆ ತೋರಿಸುತ್ತಿದ್ದುದ್ದನ್ನು ಕಂಡಾಗ ದೇಹಧಾಡ್ರ್ಯ ಸ್ಪರ್ಧೆಯ ಯುವಕರು ನೆನಪಾಗುತ್ತಿದ್ದರು. ನೋಡಿದರೆ ಒಟ್ಟು ಆರು ಮಿಂಚುಳ್ಳಿಗಳಿದ್ದವು. ಯಾರು ಗಂಡು ಯಾರು ಹೆಣ್ಣು ಎಂದು ತಿಳಿಯಲಾಗದಿದ್ದರೂ ಹೆಣ್ಣನ್ನು ಮೆಚ್ಚಿಸಲು ಗಂಡು ಮಾಡುವ ಪ್ರಣಯದ ಮುಂಚಿನಾಟ ನನ್ನ ಕ್ಯಾಮೆರಾದಲ್ಲಿ ಸೆರೆಯಾಯಿತು. ಗಂಡು ತನ್ನ ರೆಕ್ಕೆಗಳನ್ನು ಅಗಲಿಸಿ ಬಿಳಿಯ ಮಚ್ಚೆಯನ್ನು ತೋರಿಸುತ್ತಾ ತನ್ನ ಬಾಹುಬಲದ ಶಕ್ತಿ ಪ್ರದರ್ಶನ ಮಾಡುತ್ತಾನೆ. ಹೆಣ್ಣನ್ನು ಒಲೈಸಲು ಗಂಡು ತೋರುವ ಉತ್ಸಾಹ/ಉಮೇದು ಮತ್ತು ರೋಚಕತೆಯನ್ನು ವರ್ಣಿಸಲು ಪದಗಳೆ ಸಾಲದು. ಯಾರು ಎಲ್ಲಿದ್ದಾರೆ, ಏನು ಮಾಡುತ್ತಾರೆ ಮತ್ತು ಯಾವ ಕಡೆ ಹಾರುತ್ತಾರೆ ಎಂಬುದೇ ತಿಳಿಯುತ್ತಿರಲಿಲ್ಲ. ಅದರ ದೃಶ್ಯಾವಳಿಗಳು ತಮ್ಮ ಮುಂದಿವೆ.







ತನ್ನ ಮೈಮಾಟ ಪ್ರದರ್ಶಿಸುವ ಗಂಡು ತಾನು ಈಗಾಗಲೇ ಕೆರೆ, ನದಿ ಅಥವಾ ಗದ್ದೆ ಬದಿಯ ಮಣ್ಣಿನ ಗೋಡೆಯಂತಿರುವ ಜಾಗದಲ್ಲಿ ಸುರಂಗ ಮಾಡಿ ಹೆಣ್ಣಿಗೆ ತಾನು ನಿನ್ನ ಮಕ್ಕಳ ತಂದೆಯಾಗಲು ಯೋಗ್ಯವೆಂದು ಸಾಬೀತು ಮಾಡಬೇಕು. ಆ ಸುರಂಗದ ಗೂಡನ್ನು ಹೆಣ್ಣು ಪರೀಕ್ಷಿಸಿ ಯೋಗ್ಯ ಗಂಡನ್ನು ಆಯ್ಕೆ ಮಾಡಬೇಕು. ಇಷ್ಟಕ್ಕೆ ವರ ಪರೀಕ್ಷೆ ಮುಗಿಯುವುದಿಲ್ಲ. ಗಂಡು ತನ್ನನ್ನು ಆಯ್ಕೆ ಮಾಡಬೇಕಾದ ಹೆಣ್ಣಿಗೆ ರುಚಿಯಾದ ತಿನಿಸುಗಳನ್ನು ಕೊಡಬೇಕು. ಯಾವ ಗಂಡು ಒಳ್ಳೆಯ ದೇಹ, ಗೂಡು ಮಾಡುವ ತಾಕತ್ತು ಮತ್ತು ಶಿಕಾರಿ ಮಾಡಿ ಒಳ್ಳೆಯ ಆಹಾರವನ್ನು ತಂದು ಕೊಡುವಲ್ಲಿ ಯಶಸ್ವಿಯಾಗುತ್ತದೋ ಅಂತವನನ್ನು ಮೆಚ್ಚಿ ಹೆಣ್ಣು ತನ್ನನ್ನು ಅವನಿಗೆ ಸಮರ್ಪಿಸಿಕೊಳ್ಳುತ್ತಾಳೆ. ತನಗಿಷ್ಟವಾಗದವರು ಹತ್ತಿರ ಬಂದರೆ ಕೋಪಿಸಿಕೊಳ್ಳುತ್ತಾಳೆ. ಅಂತಹವರಿಂದ ದೂರ ಹೋಗುತ್ತಾಳೆ. ಇಲ್ಲಿದ್ದ ಹೆಣ್ಣು ಯಾರಿಗೆ ಒಲಿದಳು ಎಂಬುದು ಮಾತ್ರ ತಿಳಿಯಲಿಲ್ಲ. ಆಯ್ಕೆಯಾದ ಗಂಡಿನೊಡನೆ ಉದ್ದದ ಸುರಂಗ ಗೂಡನ್ನು ಪೂರ್ತಿ ಮಾಡಿ ಅವನೊಂದಿಗೆ ಕೂಡಿದ ನಂತರ ಹೆಣ್ಣು ನಾಲ್ಕರಿಂದ ಏಳು ಮೊಟ್ಟೆಗಳನ್ನಿಡುತ್ತಾಳೆ. ಮೊಟ್ಟೆಗಳಿಗೆ ಕಾವು ಕೊಡುವುದರಲ್ಲಿ ಮತ್ತು ಮರಿಗಳ ಪೋಷಣೆಯಲ್ಲಿ ತಂದೆ-ತಾಯಿಯರಿಬ್ಬರೂ ಸಮಭಾಗಿಗಳು. ಈ ವಿಸ್ಮಯ ಲೋಕದ ಮಿಂಚುಳ್ಳಿಗಳ ಪ್ರಣಯದಾಟ ನೋಡಿದ ಸಂತೋಷದಲ್ಲಿ ನಾವು ಭಾಗಿಗಳಾದೆವು.

**ಲೇಖನ: ಡಾ. ಎಸ್. ಶಿಶುಪಾಲ**

**ದಾವಣಗೆರೆ ಜಿಲ್ಲೆ**




# ಪ್ರಕೃತಿಯಲ್ಲಿನ ಜೀವನ ಚಕ್ರ

ನಾವು ನಮ್ಮ ಸುತ್ತಲಿನ ಪರಿಸರದಲ್ಲಿ ಅನೇಕ ಜೀವಿಗಳನ್ನು ನೋಡುತ್ತೇವೆ. ಪ್ರತಿಯೊಂದು ಜೀವಿಯೂ ತನ್ನದೇ ಆದ ವಿಶಿಷ್ಟ ರೀತಿಯ ಜೀವನ ಚಕ್ರವನ್ನು ಹೊಂದಿದೆ. ಈ ಜೀವನ ಚಕ್ರದಲ್ಲಿ ಹುಟ್ಟು ಒಂದು ಭಾಗವಾದರೆ, ಸಾವು ಕೂಡ ಒಂದು ಭಾಗವೇ. ಎರಡಕ್ಕೂ ಒಂದು ಪರಿಪೂರ್ಣವಾದ ಅರ್ಥವಂತು ಇದ್ದೇ ಇದೆ. ಒಂದು ಜೀವಿಯ ಹುಟ್ಟಿನಿಂದ ಪರಿಸರಕ್ಕೆ ಎಷ್ಟು ಉಪಯೋಗವೋ, ಸಾವಿನಿಂದ ಕೂಡ ಅಷ್ಟೇ ಉಪಯೋಗವಿದೆ. ಪರಿಸರ ಪ್ರೇಮಿಯಾದ ನಾನು ಎಲ್ಲಿ ಹೋದರು ಮೊದಲು ಹುಡುಕುವುದು ಅಲ್ಲಿನ ಜೀವ ಸಂಕುಲವನ್ನೇ..

ಅಂತೆಯೇ ಒಂದು ದಿನ ಸಾಗರದ ಎಲ್. ಬಿ ಕಾಲೇಜಿನ ವಿದ್ಯಾರ್ಥಿ ನಿಲಯದಲ್ಲಿ ವಿಹರಿಸುತ್ತಿದ್ದಾಗ ಅಕಸ್ಮಾತಾಗಿ ಲಿಂಬೆ ಗಿಡದಲ್ಲಿ ಹಸಿರು ಬಣ್ಣದ ಕಂಬಳಿ ಹುಳುವನ್ನು (Caterpillar) ನೋಡಿದೆ. ಹಾಗೆಯೇ ಪ್ರತಿ ದಿನ ಒಂದು ಬಾರಿ ಅದನ್ನು ಗಮನಿಸುವುದು ಕೂಡ ನನ್ನ ದಿನ ನಿತ್ಯದ ರೂಢಿಯಾಯಿತು. ದಿನ ಕಳೆಯುತ್ತಿದ್ದಂತೆ ಕಂಬಳಿ ಹುಳು ತನ್ನ ಆಕಾರ ಮತ್ತು ರೂಪದಲ್ಲಿ ಬದಲಾಗಿ ಪೊರೆಹುಳು (Pupa) ಹಂತವನ್ನು ತಲುಪಿಯೇ ಬಿಟ್ಟಿತು(13/12/2020 ರಂದು). ಮೊದಲು ಹಚ್ಚ ಹಸಿರು ಬಣ್ಣದ್ದಾಗಿದ್ದ ಪೊರೆಹುಳುವಿನ ಬಣ್ಣ ದಿನದಿಂದ ದಿನಕ್ಕೆ ಬದಲಾಗತೊಡಗಿತು. ಸುಮಾರು 17 ದಿನಗಳಾದ ಮೇಲೆ (30/12/2020 ರ ಹೊತ್ತಿಗೆ) ಅದರ ಬಣ್ಣ ಕಪ್ಪು ಮಿಶ್ರಿತ ತಿಳಿ ಕಂದು ಬಣ್ಣದ್ದಾಗಿತ್ತು.

ನನಗೆ ಇದು ಯಾವಾಗ ಚಿಟ್ಟೆಯಾಗತ್ತೊ, ಯಾವ ಚಿಟ್ಟೆಯಾಗತ್ತೊ ಎಂಬ ಕುತೂಹಲ. ಅಚಾನಕ್ಕಾಗಿ ನಾಲ್ಕು ದಿನವಾದ ಮೇಲೆ (03/01/2021 ರ ಬೆಳಗ್ಗೆ) ಗುಲಾಬಿ ಮಿಶ್ರಿತ ಕೆಂಪು, ಕಪ್ಪು ಮತ್ತು ಬಿಳಿ ಬಣ್ಣಗಳ ರೆಕ್ಕೆಹೊದ್ದು ತನ್ನ ಪ್ಯೂಪಾದ ಮೇಲೆ ಕುಳಿತ್ತಿದ್ದಳು ಕಸ್ತೂರಿ ಚಿಟ್ಟೆ (Common Mormon) ಚಿಟ್ಟೆ. ಮುದುರಿಕೊಂಡಿದ್ದ ತನ್ನ ರೆಕ್ಕೆಗಳನ್ನು ಬಿಚ್ಚಿ ಅನೇಕ ಬಾರಿ ಹಾರಲು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಇನ್ನೂ ಸೂರ್ಯನ ಬಿಸಿಲು ಬೀಳದ ಕಾರಣ ರೆಕ್ಕೆಗಳಿಗೆ



ಸೂರ್ಯನ ಶಾಖ ಸಿಗದೆ, ಹಾರಲು ರೆಕ್ಕೆಗಳು ಸ್ಪಂದಿಸುತ್ತಿರಲಿಲ್ಲ. ನೋಡ ನೋಡುತ್ತಿದ್ದಂತೆ ಕಾಮನ್ ಮಾರ್ಮೊನ್ ಚಿಟ್ಟೆಯು ಹಾರಲು ಶಕ್ತಿ ಸಾಲದೆ ಕೆಳಗೆ ಇದ್ದ ಕಟ್ಟಿರುವೆಗಳ ರಾಶಿಯ ಮೇಲೆ ಬಿದ್ದಿತು. ಕಟ್ಟಿರುವೆಗಳು ಮುತ್ತಿಕೊಂಡವು. ಚಿಟ್ಟೆಯು ಒದ್ದಾಡಿ ಕ್ಷಣಾರ್ಧದಲ್ಲಿ ತನ್ನ ಒದ್ದಾಟವನ್ನು ನಿಲ್ಲಿಸಿಯೇ ಬಿಟ್ಟಿತು!

ಹೀಗೆ ಒಂದು ಜೀವಿಯ ಬದುಕು ತನ್ನ ಕರ್ತವ್ಯ ನಿಭಾಯಿಸುವುದರೊಳಗೇ ಅಂತ್ಯವಾಯಿತು. ಅಂತೆಯೇ ಯಾವುದೋ ಒಂದು ಜೀವಿಯ ಹುಟ್ಟು ಇನ್ಯಾವುದೋ ಒಂದು ಜೀವಿಯ ಆಹಾರವಾಗಿರುತ್ತದೆ. ಇದೇ ತಾನೆ ಎಲ್ಲಾ ಜೀವಿಗಳು ಒಪ್ಪಿಕೊಳ್ಳಲೇಬೇಕಾದ ಪ್ರಕೃತಿಯ ನಿಯಮ.




**ಲೇಖನ: ಸೌಮ್ಯ ಅಭಿನಂದನ್**

**ಶಿವಮೊಗ್ಗ ಜಿಲ್ಲೆ**




ವಿವಿ ಅಂಕಣ

# ಲೋಹದ ಸ್ನಾಯುಗಳು!

ನಾನು : ಮಾ... ಸಕ್ರೆ ಏನಿಕ್ಕೆ ಇರ್ವೆಗೆ ಹಾಕ್ತಾ ಇದ್ಯಾ?

ಅಮ್ಮ : ಅವು ಒಳ್ಳೆ ಇರ್ವೆ ಕಣೋ

ನಾನು : ಒಳ್ಳೆ ಇರ್ವೆ ನಾ, ಎಲ್ಲಾ ಇರುವೆಗಳು ಕಚ್ತವೆ ತಾನೆ?

ಅಮ್ಮ : ಇವು ಕಪ್ಪಿರ್ವೆ ಕಚ್ಚಲ್ಲ. ಒಳ್ಳೇವು, ಸಕ್ರೆ ತಗೊಂಡು ಹೋಗ್ಬಿಡ್ತಾವೆ ನೋಡ್ಕೋ

ಹೀಗೆ ಸಣ್ಣ ಕಪ್ಪು ಬಣ್ಣದ ಒಂದು ಪ್ರಭೇದದ ಇರುವೆ ಕಂಡರೆ ನನ್ನ ಅಮ್ಮ, ಅಡುಗೆ ಮಾಡುವ ಮಧ್ಯದಲ್ಲೂ ಬಿಡುವು ಮಾಡಿಕೊಂಡು ಹೋಗಿ ಸಕ್ಕರೆ ಹಾಕುತ್ತಿದ್ದಳು. ಆಗಲಿಂದ ಅಂತಹ ಇರುವೆ ನಮಗೆ ಒಳ್ಳೆ ಇರುವೆ. ಇದಕ್ಕೆ ಅಭಿಮುಖವಾಗಿ ಅಮ್ಮನ ಇನ್ನೊಂದು ಮುಖವಿದೆ. ಮುಂದೆ ನೋಡಿ, ಆಗ ಊರಿನಲ್ಲಿ ಎಲ್ಲಾ ಮನೆಗಳು ಹೆಂಚಿನ ಮನೆಗಳಾಗಿದ್ದವು. ಮನೆಯ ಒಳಗೆ ನೆಲ ಮಣ್ಣಿನದ್ದಾಗಿತ್ತು. ಹಸುವಿನ ಸಗಣಿಯಿಂದ ಪ್ರತೀ ಶುಕ್ರವಾರ ಸಾರಿಸುವುದರಿಂದ ಕೆಲವು ಸೆಂಟೀಮೀಟರುಗಳಷ್ಟು ಆಳಕ್ಕೆ ಮಣ್ಣು ಹುದುಗಿರುತ್ತಿತ್ತು. ಚಾಪೆ ಹಾಸಿ ಮಲಗಿದರೂ ನೆಲದ ಅಂಕು ಡೊಂಕು ಅನುಭವಕ್ಕೆ ಬರುತ್ತಿತ್ತು. ಕೆಲವೊಮ್ಮೆ ನಿದ್ರೆಯಲ್ಲಿ ಅದರಿಂದಲೇ ಬೆಟ್ಟ ಗುಡ್ಡಗಳ ಮೇಲೆ ಓಡಾಡುವ ಹಾಗೆ ಆಗಿರುವುದುಂಟು. ಹಾಗೆಯೇ ಕೆಲವೊಮ್ಮೆ ಯಾರೋ ಚುಚ್ಚಿ ಚುಚ್ಚಿ ಎಬ್ಬಿಸಿದಂತೆಯೂ ಆಗುತ್ತಿತ್ತು. ಬೆಳಿಗ್ಗೆ ಎದ್ದು ನೋಡಿದರೆ, ನಾವು ಹಾಸಿ ಮಲಗಿದ್ದ ಜಾಗದಲ್ಲಿ ಯಾವುದೋ ಒಂದು ಪ್ರಭೇದದ ಇರುವೆ ಮಣ್ಣಿನಲ್ಲಿ ಗೂಡು ಮಾಡಿ ಕೇವಲ ಒಂದೇ ಒಂದು ಸಣ್ಣ ರಂಧ್ರವನ್ನು ತನ್ನ ಹೆಬ್ಬಾಗಿಲಾಗಿ ಮಾಡಿಕೊಂಡಿರುವುದು ಕಾಣುತ್ತಿತ್ತು. ಅಮ್ಮನಿಗೆ ಬೆಳಿಗ್ಗೆಯ ವರದಿಯಲ್ಲಿ ಈ ವಿಷಯ ತಿಳಿಸಿದ ಕೂಡಲೇ ದೇವರ ಫೋಟೋ ಬಳಿ ಹೋಗಿ ಅರಿಶಿನ ತಂದು ಆ ಇರುವೆಯ ಗೂಡಿನ ಸುತ್ತ ಉದುರಿಸುತ್ತಿದ್ದಳು. ಅದೇಕೆ ಎಂದು ಕೇಳಿದರೆ, ಇವು ಕಚ್ಚುವ ಇರುವೆ ಅದಕ್ಕೆ

ಸಾಯಲಿ ಎಂದು ಅರಿಶಿನ ಹಾಕಿದ್ದೇನೆ, ಎನ್ನುವಳು. ಕೆಲವೊಮ್ಮೆ ಗೂಡು ದೊಡ್ಡದಿರುತ್ತಿತ್ತು, ಇರುವೆಗಳೂ ಹೆಚ್ಚಿನ ಸಂಖ್ಯೆಯಲ್ಲಿ ಸೇರಿ ತಮ್ಮ ಕೆಲಸದಲ್ಲಿ ಎಂದಿನಂತೆ ಮುಳುಗಿರುತ್ತಿದ್ದವು. ಅಂತಹದ್ದೇನಾದರೂ ಅಮ್ಮನಿಗೆ ಕಂಡುಬಿಟ್ಟರೆ ಮುಗಿಯಿತು. ನನ್ನ ಮನೆಯೊಳಗೆ ನಿಮ್ಮ ಸಾಮ್ರಾಜ್ಯವೋ ಎಂಬಂತೆ, ಹೋಗಿ ಮುಸರೆ ಬಟ್ಟೆಗೆ ಸೀಮೆ ಎಣ್ಣೆಯನ್ನು ಸೋಕಿಸಿ ತಂದು ಅದರ ಗೂಡಿನ ಬಳಿ ಹಾಕುತ್ತಿದ್ದಳು. ಆ ಸೀಮೆ ಎಣ್ಣೆಯ ವಾಸನೆಗೆ ಅವು ಜಾಗ ಖಾಲಿ ಮಾಡಲೇ ಬೇಕಿತ್ತು. ಎಲ್ಲೋ ಕೆಲವು ಮಾತ್ರ, ಮಾತು ಕೇಳದಿದ್ದಾಗ ಅವುಗಳ ಮೇಲೆ ಅಗ್ನಿ ಅಸ್ತ್ರವನ್ನೂ ಪ್ರಯೋಗಿಸಿದ್ದುಂಟು. ಅರೇ, ಒಂದು ಸಣ್ಣ ಇರುವೆಗೆ ಇಷ್ಟೆಲ್ಲಾ ಕಷ್ಟಕೊಟ್ಟು ಸಾಯಿಸಬೇಕೆ? ಎನ್ನುವುದಾದರೆ ಒಮ್ಮೆ ಅವುಗಳಿಂದ ಕಚ್ಚಿಸಿಕೊಳ್ಳಿ ತಿಳಿಯುತ್ತದೆ. 'ಮೂರ್ತಿ ಚಿಕ್ಕದಾದರೂ, ಕೀರ್ತಿ ದೊಡ್ಡದು' ಎಂಬ ಗಾದೆಯ ಅರ್ಥ ಖಂಡಿತ ಮನವರಿಕೆಯಾಗುತ್ತದೆ. ಕಟ್ಟಿರುವೆ ಅಥವಾ ಕೆಟ್ಟಿರುವೆ ಎಂದು ನಾವು ಕರೆಯುವ ದಪ್ಪದಾದ ಕಪ್ಪು ಇರುವೆ ಕಚ್ಚಿದರೆ ಒಮ್ಮೊಮ್ಮೆ ಕತ್ತರಿಯ ತುದಿಯಿಂದ ಕತ್ತರಿಸಿದ ಹಾಗೆ ಗಾಯವೂ ಆಗಿರುತ್ತದೆ. ನಾನು ನೋಡಿದ ಹಾಗೆ ಎಲ್ಲಾ ಇರುವೆಗಳೂ ಕಚ್ಚುತ್ತವೆ. ಅದು ಎಷ್ಟೇ ಸಣ್ಣದಿದ್ದರೂ ಸರಿ, ಎಷ್ಟೇ ದಪ್ಪದಿದ್ದರೂ ಸರಿ ಅಥವಾ ಎಷ್ಟೇ ವಿಚಿತ್ರವಿದ್ದರೂ ಸರಿ. ಹಾಗೆ ನೋಡಿದರೆ ಅಮ್ಮ ತೋರಿಸಿದ "ಆ " ಕಪ್ಪು ಇರುವೆ ಮಾತ್ರ ಇದುವರೆಗೂ ನನಗೆ ಕಚ್ಚಲಿಲ್ಲ. ಅದಕ್ಕೆಂದೇ ಇರಬೇಕು ಅಮ್ಮ ಅವುಗಳಿಗೆ "ದೇವರ ಇರುವೆ" ಎಂದು ಹೆಸರಿಟ್ಟು ಸಕ್ಕರೆಯ ನೈವೇದ್ಯ ನೀಡುತ್ತಿದ್ದುದು.




ಆದರೂ ಅಷ್ಟು ಸಣ್ಣ ಇರುವೆ ಇಷ್ಟು ದೊಡ್ಡ ದೇಹದ ಪ್ರಾಣಿಗೆ ಕಚ್ಚಿದರೆ ಹೇಗೆ ಇಷ್ಟು ನೋವಾಗುತ್ತದೆ? ಅಲ್ಲವೇ? ಇಲ್ಲೇನೋ ಇರಬೇಕು. ಇರುವೆಯೇ ಅಷ್ಟು ಸಣ್ಣ ಗಾತ್ರ, ಅದರಲ್ಲೂ ಅದರ ಮೂತಿಯ ಬಳಿ ಇರುವ ಆ ಸೂಕ್ಷ್ಮ ಕೊಂಡಿಗಳಿಗೆ ಇಷ್ಟು ಶಕ್ತಿ ಹೇಗೆ ಬಂತು? ಏಕೆಂದರೆ ಚಿಕ್ಕಂದಿನಲ್ಲಿ ನಮ್ಮ ತಂದೆ ಅಥವಾ ತರಗತಿಯಲ್ಲಿ ಶಿಕ್ಷಕರು ಹೊಡೆಯುವ ಏಟಿಗೆ ಬೆತ್ತವೇ ಮುರಿದು ಹೋದ ನಿದರ್ಶನಗಳಿವೆ. ಹೀಗಿರುವಾಗ ಈ ಇರುವೆಗೆ ಹೇಗೆ ಸಾಧ್ಯ? ಎಂದಷ್ಟೇ ನನ್ನ ಪ್ರಶ್ನೆ. ನನ್ನ ಈ ಪ್ರಶ್ನೆಯನ್ನು ಸ್ವಲ್ಪ ಗಂಭೀರವಾಗಿಯೇ ತೆಗೆದುಕೊಂಡ ರಾಬರ್ಟ್ ಸ್ಕೋಫೀಲ್ಡ್ ಎಂಬ ಭೌತಶಾಸ್ತ್ರಜ್ಞ ಇದಕ್ಕೆ ಉತ್ತರವನ್ನು ಹುಡುಕುತ್ತಾ ಹೊರಟರು. ತಮ್ಮ ಅಧ್ಯಯನಕ್ಕೆಂದು 'ಎಲೆ ಕತ್ತರಿಸುವ' ಒಂದು ಇರುವೆಯ ಪ್ರಭೇದವನ್ನು ಆರಿಸಿಕೊಂಡರು. ಆ ಇರುವೆಗಳ ಅಷ್ಟು ಚೂಪಾದ ಮತ್ತು ಬಲವಾದ ಕತ್ತರಿಯ ಬಾಯಿಗೆ ಮೂಲ ಅವುಗಳು ಮಾಡಲ್ಪಟ್ಟಿರುವ ವಸ್ತುಗಳಿಂದ. ಹೌದು, ಇಂತಹ ಇರುವೆಗಳ ಈ ಕತ್ತರಿಸುವ ಕೊಂಡಿಗಳು ಕೇವಲ ಜೀವಕೋಶಗಳಿಂದ ಮಾತ್ರ ಆಗಿರದೆ, ಅದರಲ್ಲಿ ಸತು (zinc) ಮತ್ತು ಮ್ಯಾಂಗನೀಸ್ ನಂತಹ ಲೋಹಗಳು ಇರುತ್ತವೆ. ಅದರಿಂದಾಗಿಯೇ ಅವುಗಳಿಗೆ ಅಷ್ಟು ಬಲವಿರುತ್ತದೆ ಹಾಗೂ ಶಕ್ತಿಯುತವಾಗಿರುತ್ತವೆ. ಆದರೆ

ಇರುವೆಗಳ ಕತ್ತರಿಸುವ ಕಾರ್ಯಕ್ಕೆ ಇಂತಹ 'ಲೋಹದ ಸ್ನಾಯು'ಗಳಿದ್ದರೆ ಸಾಲದು ಜೊತೆಗೆ ಹಲ್ಲುಗಳಂತಹ ರಚನೆಯೂ ಇದೆ. ಇರುವೆಗಳಂತಹ ಕೀಟಗಳಿಗೆ ಲೋಹದ ಸ್ನಾಯುಗಳಿರುತ್ತವೆ ಎಂದು ಈ ಹಿಂದೆಯೂ ಕೆಲವು ಸಂಶೋಧನೆಗಳು ಹೇಳಿವೆ. ಆದರೆ ಈ ಎಲೆ ಕತ್ತರಿಸುವ ಇರುವೆ ಕೊಂಚ ವಿಶೇಷ. ಅದು ಹೇಗೆಂದರೆ, ಈ ಇರುವೆಗಳಲ್ಲಿ ಹಿಂದೆ ಹೇಳಿದ ಹಾಗೆ ಕೇವಲ ಲೋಹದ ಸ್ನಾಯುಗಳು ಮಾತ್ರವಲ್ಲದೇ ಆ ಕೊಂಡಿಗಳಲ್ಲಿ ಚೂಪಾದ ಹಲ್ಲಿನಂತಹ ರಚನೆಗಳಿವೆ.




ಈ ಹಲ್ಲಿನಂತಹ ರಚನೆಯ ಚೂಪಿನ ರಹಸ್ಯ ತಿಳಿಯಲು ಅದನ್ನು ವಿಶೇಷ ಸೂಕ್ಷ್ಮದರ್ಶಕದಲ್ಲಿ ನೋಡಲಾಯಿತು. ಅದರಲ್ಲಿ ಬಯಲಾದ ಸತ್ಯ ಅವುಗಳ ಚೂಪಿನ ಕಾರಣವನ್ನೂ ಹೇಳಿಬಿಟ್ಟವು. ಅದೇನೆಂದರೆ, ಅವುಗಳ ಕೊಂಡಿಯಲ್ಲಿದ್ದ ಅದೇ ಸತು ಮತ್ತು ಮ್ಯಾಂಗನೀಸ್ ಲೋಹಗಳು ಇಲ್ಲಿ ಕಂಡವಾದರೂ ಅವುಗಳ ಜೋಡಣೆ ಬೇರೆ ರೀತಿಯಲ್ಲಿತ್ತು. ಅಂದರೆ ಹಲ್ಲಿನಂತಹ ರಚನೆಯಲ್ಲಿ ಸತುವಿನ ಅಣುಗಳು ಏಕರೂಪವಾಗಿ (homogeneous) ಹರಡಿದ್ದವು. ಅಣುಗಳ ಗುಂಪುಗಳಾಗಿ (chunks) ಅಲ್ಲ. ಇದರ ಫಲವಾಗಿ ಹಲ್ಲಿನಂತಹ ರಚನೆ ಹೆಚ್ಚು ಚೂಪಾದರೂ ಮುರಿಯುವ ತೊಂದರೆ ದೂರಾಯಿತು. ಖನಿಜಗಳಿಂದ ಮಾಡಿದ ಜೀವಿಯ ಹಲ್ಲುಗಳಿಗಿಂತ ಇವು ಎಷ್ಟೋ ಬಲವಾಗಿದ್ದವು ಹಾಗೂ ನೀಳವಾಗಿ ಚೂಪಾಗಿದ್ದವು. ಅದನ್ನೂ ತಿಳಿಯಲು ಚಿಟಿನ್ ಮತ್ತು ಕ್ಯಾಲ್ಸಿಯಮ್ ನಿಂದ ಮಾಡಿರುವಂತಹ ಎಷ್ಟೋ ಕೀಟಗಳ ಹೊರ ಕವಚಗಳಿಗಿಂತ ಇದು ಎರಡರಷ್ಟು ಬಲವಾಗಿತ್ತು. 'ಎಷ್ಟರ ಮಟ್ಟಿಗೆ ಎಂದರೆ ನಾವು ಬಳಸುವ ಲೋಹದ ಕತ್ತರಿ ಅಥವಾ ಚಾಕುವಿನ ಬಲಕ್ಕೆ ಸಮ' ಎನ್ನುತ್ತಾರೆ ರಾಬರ್ಟ್ ಸ್ಕೋಫೀಲ್ಡ್. ಇದೇ ಸಂಶೋಧನೆ ಹೇಳುವ ಹಾಗೆ ಈ ಲೋಹದ ಸ್ನಾಯುವಿನ ಹಲ್ಲಿನಂತಹ ರಚನೆಯ ಕಾರಣದಿಂದ 100% ಶಕ್ತಿ ಬಳಸಿ ಮಾಡುವ ಕೆಲಸವನ್ನು ಕೇವಲ 60% ಶಕ್ತಿಯನ್ನು ಬಳಸಿ ಮಾಡುವ ಸಾಮರ್ಥ್ಯ ಅದಕ್ಕಿದೆಯಂತೆ. ಇಂತಹ ಶಕ್ತಿಗಳಿಂದಲೇ ಇರಬೇಕು ಇರುವೆಗಳ ಕೈಗೆ ಎಟುಕದ ಆಹಾರ ಪದಾರ್ಥವೇ ಇಲ್ಲ ಎನಿಸುತ್ತದೆ.

ಐರನ್ ಮ್ಯಾನ್, ಸೂಪರ್ ಮ್ಯಾನ್, ಬ್ಯಾಟ್ ಮ್ಯಾನ್ ಗಳಂತಹ ಲೋಹದಂತೆ ಶಕ್ತಿಯುಳ್ಳ ಮಾನವರನ್ನು ಸೃಷ್ಟಿಸಿ ಕೇವಲ ಸಿನೆಮಾಗಳಲ್ಲಿ ನೋಡಿ ಆನಂದಿಸುವವರು ನಾವು. ಅಂತಹ ಸೂಪರ್ ಇನ್ಸೆಕ್ಟ್ ಗಳನ್ನು ಪ್ರಕೃತಿ ಸಾವಿರ ಸಾವಿರ ಪ್ರಭೇದಗಳಲ್ಲಿ ನಮಗೆ ಅರಿವಿಗೆ ನಿಲುಕದ ಕಾಲದಲ್ಲೇ ಎಲ್ಲೋ ಸೃಷ್ಟಿಸಿಯಾಗಿದೆ. ಅದನ್ನು ನಾವು ಈಗೀಗ ನಮ್ಮ ನರಕೋಶಗಳಲ್ಲಿ ಸೇರಿಸಿಕೊಳ್ಳುತ್ತಿದ್ದೇವೆ ಅಷ್ಟೇ. ಅದಕ್ಕೇ ಹೇಳುವುದು ಯಾವುದೂ ಯಕಃಶ್ಚಿತವಲ್ಲ.

**ಮೂಲ ಲೇಖನ:** ScienceNewsforStudents

**ಲೇಖನ: ಜೈಕುಮಾರ್ ಆರ್.**
**ಡಬ್ಲ್ಯೂ. ಸಿ. ಜಿ. ಬೆಂಗಳೂರು ಜಿಲ್ಲೆ**

# ಗುಲಾಬಿ

ನಾ ಬರೀ ಚಿತ್ರವಲ್ಲ ಅಣ್ಣ
ನೋಡು ಇರುವ ರಕ್ತ ಕೆಂಪು
ಎಳೆಎಳೆಯಾಗಿ
ಪದರದಿ
ಪದಜಾರಿಸುವ
ಸಮ್ಮೋಹಿತ ಕುಸುಮನಾ

ನಾ ಬರೀ ಚಿತ್ತಾರವಲ್ಲ ಅಣ್ಣ
ಪ್ರಿಯ ಪ್ರಿಯೆಯರ
ಆಲಿಂಗನಾದೂತನಾ
ಮಜ್ಜನಾದಿ ಪೂಸಿಕೊಳುವ
ಅತ್ತರಿನ ಧಾತುನಾ

ನಾ ಬರೀ ಚಿತ್ರವಲ್ಲ ಅಣ್ಣ
ಔಷಧದೊಳಗೂ ನುಸಿಳಿಹ
ಮುಳ್ಳು ರಾಣಿನಾ
ನವಾಬಲಾಲರ
ಲಾಲನೆಯೊಳು ಬೆಳೆದ
ಗುಲಾಬಿ ನಾನು
ಒಳಗಣ್ಣೊಳು ಕಾಣು
ನಾ ಬರೀ ಚಿತ್ರವಲ್ಲ ಅಣ್ಣ

ಡಾ.ದೀಪಕ್ ಭ
ಮೈಸೂರು ಜಿಲ್ಲೆ

# ಪ್ರಕೃತಿ ಬಿಂಬ



ಸ್ಟ್ರಿಗೊಪ್ಲಸ್ ಏಡಿ ಜೇಡ © ವಿಪಿನ್ ಬಾಳಿಗಾ

ಸ್ಟ್ರಿಗೊಪ್ಲಸ್ ಏಡಿ ಜೇಡಗಳು(Strigoplus Crab Spiders) ಇರುವೆಗಳನ್ನು ಹಿಡಿಯುವಲ್ಲಿ ಪರಿಣಿತಿ ಹೊಂದಿರುವ ನಿಷ್ಣಾತ ಬೇಟೆಗಾರರು. ಜೆರ್ಡಾನ್‌ನ ಜಿಗಿಯುವ ಇರುವೆಗಳು ಸಹ ಪ್ರಬಲವಾದ ಏಕಾಂಗಿ ಬೇಟೆಗಾರರಾಗಿದ್ದು, ಮಿಡತೆಗಳಂತಹ ದೊಡ್ಡ ಬೇಟೆಯನ್ನು ಏಕಾಂಗಿಯಾಗಿ ಉರುಳಿಸುವ ಹಾಗೂ ಹಾರುವ ಕೀಟಗಳನ್ನು ಹಿಡಿಯುವ ಸಾಮರ್ಥ್ಯವನ್ನು ಹೊಂದಿದೆ. ಆದರೂ ಈ ಏಡಿ ಜೇಡಗಳು ಜೆರ್ಡಾನ್ ಜಿಗಿಯುವ ಇರುವೆಯನ್ನು ಹಿಡಿದಿದ್ದ ಪರಿ ನಮ್ಮಲ್ಲಿ ಆಶ್ಚರ್ಯವನ್ನುಂಟುಮಾಡಿತು. ಈ ಅದ್ಭುತ ಕ್ಷಣವನ್ನು ಕ್ಯಾಮೆರಾದಲ್ಲಿ ಸೆರೆ ಹಿಡಿಯಲು ನಾವು ಹರ ಸಾಹಸವನ್ನೇ ಪಡಬೇಕಾಯಿತು. ಹುಲ್ಲುಗಾವಲಿನ ಮಧ್ಯದಲ್ಲಿನ ಒಂದು ಸಣ್ಣ ಹುಲ್ಲಿನ ಮೇಲೆ ಜೆರ್ಡಾನ್ ಇರುವೆಯನ್ನು ಹಿಡಿದಿದ್ದ ಈ ಏಡಿ ಜೇಡವನ್ನು ಕಂಡ ನಾವು ಆ ಹುಲ್ಲು ಸ್ವಲ್ಪವೂ ಅಲುಗಾಡದಂತೆ ಹೊರ ತಂದು, ಒಂದು ಕೈನಲ್ಲಿ ಕ್ಯಾಮೆರಾ ಹಿಡಿದು ಮತ್ತೊಂದು ಕೈಯಲ್ಲಿ ಆ ಹುಲ್ಲನ್ನು ಹಿಡಿದು 2-3 ಫೋಟೋ ಕ್ಲಿಕ್ಕಿಸುವಲ್ಲಿ ಕೈ ಸೋತು ಹೋಗುತ್ತಿತ್ತು. ಆದರೂ ಈ ಅಪರೂಪದ ಕ್ಷಣವನ್ನು ಸೆರೆಹಿಡಿದು ನಿಧಾನಕ್ಕೆ ಆ ಜೇಡವನ್ನು ಮೊದಲಿದ್ದ ಜಾಗದಲ್ಲೇ ಬಿಡಲಾಯಿತು. ಆದರೂ ಅಷ್ಟು ಪ್ರಬಲ ಹೋರಾಟಗಾರ ಇರುವೆಯನ್ನು ಈ ಜೇಡ ಬೇಟೆಯಾಡಿದ ಪರಿಯನ್ನು ನೋಡಲಿಲ್ಲವಲ್ಲ ಎನ್ನುವ ಕೊರಗು ಈ ಫೋಟೋ ಕಂಡಾಗಲೆಲ್ಲಾ ಕಾಡುತ್ತದೆ.



**ಹೈಲಸ್ ಹಾರುವ ಜೇಡ** © **ವಿಪಿನ್ ಬಾಳಿಗಾ**

ಹೈಲಸ್ ಪ್ರಭೇದದಲ್ಲಿನ ಈ ಹಾರುವ ಜೇಡವು ಅದ್ಭುತ ಬೇಟೆಗಾರ. ಈ ಮೇಲಿನ ಚಿತ್ರವು ನನಗೆ ಸಿಕ್ಕ ಪರಿಯೇ ಆಕಸ್ಮಿಕ. ಒಂದು ದಿನ ಸಂಜೆ ನಾನು ಮನೆಯ ಮಹಡಿಯ ಮೇಲಿರುವ ಹೂಕುಂಡಗಳಲ್ಲಿ ಯಾವುದಾದರೂ ಕುತೂಹಲಕರ ಕೀಟಗಳು ಸಿಗಬಹುದೇ ಎಂದು ಪರಿಶೀಲಿಸುತ್ತಿದ್ದೆ. ಇದ್ದಕ್ಕಿದ್ದಂತೆ ಏನೋ ಬಂದು ಮಹಡಿಯ ಮೇಲೆ ನನಗಿಂತ ಕೆಲವೇ ಅಡಿಗಳಷ್ಟು ದೂರದಲ್ಲಿ ಬಿದ್ದಂತಾಯಿತು. ಸ್ವಲ್ಪ ಹತ್ತಿರ ಹೋಗಿ ನೋಡಿದಾಗ ತಿಳಿದದ್ದು. ಅವು ಸಂಯೋಗದಲ್ಲಿರುವ ಜೋಡಿ ನೊಣಗಳೆಂದು. ಹಾಗೆಯೇ ಆ ನೊಣಗಳನ್ನು ಗಮನಿಸುತ್ತಿದ್ದ ನನಗೆ ಅಲ್ಲಿರುವುದು ಎರಡಲ್ಲ, ಮೂರು ನೊಣ ಎನಿಸಿತು. ಅರೆ ಏನಿದು ಸಂಯೋಗ ಕ್ರಿಯೆಯಲ್ಲಿ ಮೂರು ನೊಣಗಳೇ? ವಿಚಿತ್ರವಾಗಿದೆಯಲ್ಲಾ! ಎಂದು ಇನ್ನೂ ಸ್ವಲ್ಪ ಸೂಕ್ಷ್ಮವಾಗಿ ಗಮನಿಸಿದಾಗ ತಿಳಿಯಿತು. ಅಲ್ಲಿರುವ ಇನ್ನೊಂದು ಜೀವಿ ನೊಣವಲ್ಲ, ಜೇಡವೆಂದು! ಹೌದು ಸಂಯೋಗದಲ್ಲಿರುವ ಒಂದು ನೊಣದ ಹೊಟ್ಟೆಯನ್ನು ಈ ಹೈಲಸ್ ಪ್ರಭೇದದ ಜೇಡ ಗಟ್ಟಿಯಾಗಿ ಹಿಡಿದಿತ್ತು. ಮುಂದೇನಾಗುತ್ತೋ ನೋಡೋಣವೆಂದು ನಾನು ಕುತೂಹಲದಿಂದ ನೋಡುತ್ತಾ ನಿಂತಿದ್ದೆ. ಆ ಜೋಡಿ ನೊಣಗಳು ಈ ಜೇಡವನ್ನು ಎತ್ತಿಕೊಂಡು ಒಂದೆರಡು ಅಡಿ ಮೇಲಕ್ಕೇ ಹಾರಿದವು. ಅಲ್ಲಿಯೇ ಒಂದೆರಡು ಸುರಳಿ ಸುತ್ತಿದರೂ ಆ ಜೇಡ ತನ್ನ ಬಿಗಿಯನ್ನು ಸಡಲಿಸಲಿಲ್ಲ. ಅಲ್ಲಿಂದಲೇ ಎರಡೂ ನೊಣಗಳು ದೊಪ್ಪನೆ ಮತ್ತೇ ನೆಲದ ಮೇಲೆ ಬಿದ್ದು ಬೇರ್ಪಟ್ಟವು. ಆಗ ಜೇಡವು ಅವುಗಳಿಂದ ಬೇರ್ಪಟ್ಟು ಪೆಚ್ಚಾಗಿ ಅಲ್ಲೇ ಕುಳಿತಿತು. ಮೊಬೈಲ್ ಅಥವಾ ಕ್ಯಾಮೆರಾ ತರದೆ ಬರಿ ಗೈಲಿ ಬಂದಿದ್ದ ನಾನು ಈ ಅಪರೂಪದ ಕ್ಷಣವನ್ನು ಸೆರೆಯಿಡಿಯಲು ಆಗಲಿಲ್ಲವಲ್ಲ ಎಂದು ಕೈ ಕೈ ಹಿಸುಕಿಕೊಂಡೆ. ಕಡೇ ಪಕ್ಷ ಈ ಜೇಡವನ್ನಾದರೂ ಚಿತ್ರಿಸೋಣವೆಂದು ಕ್ಯಾಮೆರಾ ತರಲು ಓಡಿದೆ, ಅದರ ಪ್ರತಿಫಲವೇ ಈ ಮೇಲಿನ ಚಿತ್ರ.



**ಬಲೆ ಎಸೆಯುವ ಜೇಡ** © **ವಿಪಿನ್ ಬಾಳಿಗಾ**

ಈ ಬಲೆ ಎಸೆಯುವ ಜೇಡದ ಬಗ್ಗೆ ಹತ್ತು ವರ್ಷಗಳ ಹಿಂದೆ ಓದಿದಾಗಲಿಂದಲೂ ಈ ಪ್ರಬೇಧಗಳು ಕಣ್ಣಿಗೆ ಕಾಣದೆ ರಹಸ್ಯವಾಗಿಯೇ ಉಳಿದಿತ್ತು. ಒಮ್ಮೆ ಕೆಲವು ವರ್ಷಗಳ ಹಿಂದೆ ಆಗುಂಬೆ ಕಾಡಿನಲ್ಲಿ ಕಣ್ಣಿನ ಮಟ್ಟದಲ್ಲೇ ಇದನ್ನು ಮುಖಾ-ಮುಖಿ ಭೇಟಿಯಾಗಿದ್ದೆನಾದರೂ ಫೋಟೋ ತೆಗೆಯಲು ಹೋದಾಗ ಸುತ್ತಲಿನ ಎಲೆ ಅಲುಗಾಡಿ ಎಚ್ಚರಗೊಂಡ ಅದು ಅದರ ಹಿಂದೆ ಇದ್ದ ಎಲೆಯ ಪಕ್ಕದಲ್ಲೇ ಬಚ್ಚಿಟ್ಟುಕೊಂಡಿತು. ಅದನ್ನು ಆ ಪ್ರಾಂತ್ಯದಲ್ಲಿ ಕಂಡ ನನಗೆ ಈ ಬಲೆ ಎಸೆಯುವ ಜೇಡಗಳ ಆವಾಸ ಮಲೆನಾಡು ಎಂದೇ ತಿಳಿದಿದ್ದೆ. ಆದರೆ ಮೊನ್ನೆ ಮೈಸೂರಿನ ನನ್ನ ಗೆಳೆಯರ ತೋಟದಲ್ಲಿ ಇದನ್ನು ಮತ್ತೊಮ್ಮೆ ಕಂಡ ನನಗೆ, ಆವಾಸದ ಬಗ್ಗೆ ಮೊದಲು ನಾನು ಎಣಿಸಿದ್ದ ಊಹೆ ತಪ್ಪೆನಿಸಿತು. ಅಲ್ಲಿ ಈ ಜೇಡದ ಆವಾಸದ ಬಗ್ಗೆ ಸಂಪೂರ್ಣವಾಗಿ ತಿಳಿಯಿತು ಹಾಗೂ ಅಂದಿನಿಂದ ಮಲೆನಾಡನ್ನು ಹೊರತು ಪಡಿಸಿ ಬೇರೆ ಕಡೆಯಲ್ಲೂ ಈ ಜೇಡವನ್ನು ಸ್ನೇಹಿತರು ದಾಖಲಿಸುವುದನ್ನು ಗಮನಿಸಿದೆ. ಒಮ್ಮೆ ಹಿಂಗಾರಕ್ಕೆ ಹೋಗಿದ್ದ ನಾನು ಜೇಡಗಳ ಹುಡುಕಾಟದಲ್ಲಿ ತೊಡಗಿದ್ದೆ. ಆಗ ಎಲೆಗೆ ಅಂಟಿಕೊಂಡಂತೆ, ಯಾವುದೋ ಜೇಡ ಓಡಿದಂತೆ ಕಂಡಿತು. ಮೊದ ಮೊದಲು ನನಗೆ ಅದು ಏಡಿ ಜೇಡ ಎನಿಸಿತು. ಒಂದು ಸೆಂಟೀ ಮೀಟರ್ ಕ್ಕಿಂತಲೂ ಚಿಕ್ಕದಿದ್ದ ಅದನ್ನು ಇನ್ನೂ ಸೂಕ್ಷ್ಮವಾಗಿ ಗಮನಿಸಿದಾಗ ತಿಳಿದದ್ದು ಇದು ಒಂದು ಬಲೆ ಎಸೆಯುವ ಜೇಡರ ಮರಿ ಎಂದು. ನನ್ನ ಆನಂದಕ್ಕೆ ಪಾರವೇ ಇರಲಿಲ್ಲ. ಎಲೆಯ ಕೆಳಗಿನ ಭಾಗದಲ್ಲಿ ನೇತಾಡಿಕೊಂಡಿದ್ದ ಇದು, ಸ್ವಲ್ಪ ಅಡಚಣೆಯಾದರು ಬಚ್ಚಿಟ್ಟುಕೊಳ್ಳಲು ತಯಾರಿತ್ತು. ಹಾಗೋ-ಹೀಗೋ ಒಂದು ಚಿತ್ರವನ್ನು ಸೆರೆಹಿಡಿಯುವಲ್ಲಿ ನಾನು ಯಶಸ್ವಿಯಾದೆ. ಈ ಜೇಡವು ಬಲೆಯನ್ನು ಮೀನುಗಾರರ ರೀತಿ ತನ್ನ ಬೇಟೆಗೆ ಎಸೆಯುವ ಕಾರಣ ಇದನ್ನು ಬಲೆ ಎಸೆಯುವ ಜೇಡ ಎನ್ನುತ್ತಾರೆ.



**ಪಾಲಿರಾಚಿಸ್ ಇರುವೆ ಅನುಕರಣೆಯ ನೆಗೆ ಜೇಡ** **© ವಿಪಿನ್ ಬಾಳಿಗಾ**

ಈ ನೆಗೆ ಜೇಡವು, ಪಾಲಿರಾಚಿಸ್ ಎಂಬ ಇರುವೆ ಜಾತಿಯ ಪ್ರಭೇದವನ್ನು ಅನುಕರಣೆ ಮಾಡುವ ಕಾರಣ ಈ ಹೆಸರು ಬಂದಿದೆ. ಈ ಭಯಗ್ರಸ್ತ ಜೇಡವು ಗಿಡದ ಹೇನನ್ನೇ(Planthopper) ಊಟಕ್ಕಾಗಿ ಅವಲಂಬಿಸಿದೆ. ಇದನ್ನು ನಾನು ಕಂಡಾಗ ಅದು ಒಂದು ದುರ್ಬಲ ಸಸ್ಯದ ಮೇಲೆ ಇತ್ತು. ಆದರೆ ಅಲ್ಲಿ ಅದರ ಚಿತ್ರವನ್ನು ತೆಗೆಯಲು ಅಸಾಧ್ಯವಿದ್ದ ಕಾರಣ. ಬಲು ಎಚ್ಚರದಿಂದ ಅದನ್ನು ಒಣಗಿದ ಎಲೆಯ ಮೇಲೆ ಇಟ್ಟು ಚಿತ್ರಿಸಲಾಯಿತು.

ಸಾಮಾನ್ಯವಾಗಿ ನೆಗೆ ಜೇಡಗಳ ಚಿತ್ರಗಳನ್ನು ತೆಗೆಯುವುದು ಬೇರೆ ಜೇಡಗಳಿಗೆ ಹೋಲಿಸಿದರೆ ಬಲು ಸುಲಭ. ಆದರೆ ಸ್ವಲ್ಪೇ ಸ್ವಲ್ಪ ತೊಂದರೆ ಇದೆ ಎಂದು ತಿಳಿದರೂ ಬಾಯಲ್ಲಿರುವ ಊಟವನ್ನೂ ಸಹ ಬಿಟ್ಟು ಓಡುತ್ತವೆ. ಛಾಯಾಗ್ರಾಹಕರಾಗಿ ಈ ವಿಷಯದ ಬಗ್ಗೆ ತುಂಬಾ ಜಾಗರೂಕರಾಗಿ ಇರಬೇಕಾಗುತ್ತದೆ.

**ಚಿತ್ರ- ಲೇಖನ: ವಿಪಿನ್ ಬಾಳಿಗಾ**
**ಕನ್ನಡಕ್ಕೆ: ನಾಗೇಶ್ ಓ. ಎಸ್.**

# ನೀವೂ ಕಾನನಕ್ಕೆ ಬರೆಯಬಹುದು




ಭೂಮಿ ಮೇಲೆ ಇರುವ ಶೇಕಡಾ 36% ಪ್ರಾಣಿಗಳ ಪ್ರಭೇದವು ಅಳಿವಿನ ಅಪಾಯದಲ್ಲಿವೆ. ನಾವು ಮತ್ತು ಪ್ರಾಣಿಗಳು ಹಲವಾರು ವರ್ಷಗಳಿಂದ ಭೂಮಿಯ ಮೇಲೆ ಒಟ್ಟಿಗೆ ಬದುಕುತ್ತಿದ್ದೇವೆ. ಅವುಗಳನ್ನು ಸಂರಕ್ಷಿಸುವುದು ನಮ್ಮ ಹೊಣೆಯಾಗಿದೆ. ಅವುಗಳು ಕೂಡ ಭೂಮಿಯ ಮೇಲೆ ಬದುಕಲು ನಮ್ಮಷ್ಟೇ ಅಧಿಕಾರವನ್ನು ಹೊಂದಿವೆ. ಹಲವಾರು ಪ್ರಾಣಿಗಳು ಮಾನವನ ಬೇಟೆಯಿಂದಾಗಿ, ಅವುಗಳ ಆವಾಸ ಸ್ಥಳಗಳ ಬದಲಾವಣೆಯಿಂದಾಗಿ ನಶಿಸಿ ಹೋಗುತ್ತಿವೆ. ಉದಾಹರಣೆಗೆ ಕಲ್ಲಿನ ಪರ್ವತ ಮಿಡತೆ (Rocky mountain locust), ಡೋಡೋ ಪಕ್ಷಿ, ಸ್ಟೆಲ್ಲರ್ಸ್ ಸಮುದ್ರ ಹಸು (stellar sea cow) ಹಾಗೂ ಇನ್ನೂ ಹಲವಾರು. ಅಕ್ಟೋಬರ್ ನಾಲ್ಕರಂದು ವಿಶ್ವ ಪ್ರಾಣಿಗಳ ದಿನವೆಂದು ಆಚರಿಸಲಾಗುತ್ತದೆ. ಈ ದಿನದಂದು ಪ್ರಾಣಿಗಳ ಸಂರಕ್ಷಣೆ ಹಾಗೂ ಹಕ್ಕುಗಳನ್ನು ಎಲ್ಲರಿಗೂ ತಿಳಿಸಲಾಗುತ್ತದೆ. ಈ ದಿನದಂದು ಮಾತ್ರವಲ್ಲದೆ ಎಲ್ಲಾ ದಿನಗಳಲ್ಲೂ ಈ ವಿಷಯ ಕುರಿತು ನಮ್ಮಲ್ಲಿ ಅರಿವು ಕುತೂಹಲವಿದ್ದರೆ, ನಮ್ಮ ಮುಂದಿನ ಪೀಳಿಗೆಗೂ ನಮ್ಮ ಸುತ್ತಮುತ್ತ ಇರುವ ಪ್ರಾಣಿಗಳನ್ನು ಜೀವಂತವಾಗಿ ತೋರಿಸಬಹುದು. ಪ್ರಾಣಿಗಳ ಸಂರಕ್ಷಣೆ ಮತ್ತು ಅವುಗಳ ಹಕ್ಕುಗಳ ಕುರಿತು ನೀವು ಸಹ ಕಾನನಕ್ಕೆ ಲೇಖನಗಳನ್ನು ಬರೆಯಬಹುದು.

ಈ ರೀತಿಯ ಪರಿಸರದ ಬಗೆಗಿನ ಮಾಹಿತಿಯನ್ನು ಒದಗಿಸಲು ಇರುವ ಕಾನನ ಇ-ಮಾಸಿಕಕ್ಕೆ ಮುಂದಿನ ತಿಂಗಳ ಸಂಚಿಕೆಗೆ ಲೇಖನಗಳನ್ನು ಆಹ್ವಾನಿಸಲಾಗಿದೆ. ಆಸಕ್ತರು ಪರಿಸರಕ್ಕೆ ಸಂಬಂಧಿಸಿದ ಕಥೆ, ಕವನ, ಛಾಯಾಚಿತ್ರ, ಚಿತ್ರಕಲೆ, ಪ್ರವಾಸ ಕಥನಗಳನ್ನು ಕಾನನ ಮಾಸಿಕದ ಇ-ಮೇಲ್ ವಿಳಾಸಕ್ಕೆ ಕಳುಹಿಸಬಹುದು.

**ಕಾನನ ಪತ್ರಿಕೆಯ ಇ-ಮೇಲ್ ವಿಳಾಸ**: kaanana.mag@gmail.com
**ಅಂಚೆ ವಿಳಾಸ**:

Study House,
ಕಾಳೇಶ್ವರಿ ಗ್ರಾಮ,
ಆನೇಕಲ್ ತಾಲ್ಲೂಕು,
ಬೆಂಗಳೂರು ನಗರ ಜಿಲ್ಲೆ,
ಪಿನ್ ಕೋಡ್ : 560083. ಗೆ ಕಳಿಸಿಕೊಡಬಹುದು.